ಒಂದಾಣೆ ಮಾಲೆ 245

# ಕಥಾಕುಸುಮ ಮಂಜರೀ

(ನೀತಿಕಥೆಗಳು)




ಮೂಲ ಲೇಖಕರು:

ದಿ। ಎಸ್. ವೆಂಕಟರಾಮ ಶಾಸ್ತ್ರಿ, ಸಂಸ್ಕೃತ ಪಂಡಿತರು.

ಅನುವಾದಕರು:

ಶ್ರೀ। ಸಿ. ಗೋಪಾಲಕೃಷ್ಣಾಚಾರ್ಯ, ಚಿತ್ರಾಪುರ.





1959

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟೆಂಬರದಿಂದ 1959ನೇ ಆಗೋಸ್ತು ತಿಂಗಳ ಮೊದಲನೆಯ ವಾರದ ವರೆಗೆ 245 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕವು ಹೊರಡುತ್ತಲೇ ಇದೆ.

245 ಅಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 4746 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆ ಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆ ಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಕಥಾಕುಸುಮ ಮಂಜರೀ

## (ನೀತಿಕಥೆಗಳು)

---

೧

ನೀಚಾಶ್ರಯೋ ನ ಕರ್ತವ್ಯಃ ಕರ್ತವ್ಯೋ ಮಹದಾಶ್ರಯಃ ॥
ಈಶಾಶ್ರಯೋ ಮಹಾನಾಗಃ ಪಪ್ರಚ್ಛ ಗರುಡಂ ಸುಖಂ ॥ ೧ ॥

ಯಾವತ್ತೂ ಮಹಾತ್ಮರ ಆಶ್ರಯದಲ್ಲಿರಬೇಕು. ನೀಚರ ಆಶ್ರಯವನ್ನು ಮಾಡಬಾರದು.

ಒಂದು ದಿನ ಕೈಲಾಸಪತಿ ಶಂಕರನು ಪ್ರಮಥಗಣಗಳಿಂದೊಡಗೂಡಿ ಸ್ನಾನಕ್ಕಾಗಿ ಜಾಹ್ನವೀತೀರಕ್ಕೆ ಪ್ರಯಾಣಬೆಳೆಸುತ್ತಿದ್ದನು. ಈ ಸಂಭ್ರಮವನ್ನು ಆಕಾಶಮಾರ್ಗದಲ್ಲಿ ವಿಮಾನಸ್ಥರಾಗಿ ದೇವತೆಗಳು ಕಂಡು ಕೊಂಡಾಡುತ್ತಿದ್ದರು. ಅಲ್ಲೇ ಉರಗವೈರಿಯಾದ ಗರುಡನು ಹಾರಾಡುತ್ತಿರುವುದನ್ನು ಶಂಕರನ ಜಟಾಭರಣನಾದ ಮಹಾನಾಗನು ಕಂಡು, "ಹೇ, ವೈನತೇಯ, ಕುಟುಂಬಸಹಿತನಾಗಿ ಕುಶಲಿಯಷ್ಟೆ?" ಎಂದು ಹೀಯ್ಯಾಳಿಸಿ ಕೇಳಿದನು. ಪಾಪ! ಈಶನ ಆಶ್ರಯದಲ್ಲಿರುವ ನಾಗನನ್ನು ಕೆಣಕಲು ಅಸಾಧ್ಯವಾಗಿ ಗರುಡನು ಲಜ್ಜೆಯಿಂದ ಕಣ್ಮರೆಯಾದನು.

೨

ದೇವತಾನಾಂ ಪ್ರಸಾದೇನ ಸುಖಂ ಜೀವಂತಿ ಮಾನವಾಃ ॥
ಅಭಾವೇ ತತ್ಪ್ರಸಾದಸ್ಯ ಮೂಲಚ್ಛೇದಮವಾಪ್ನುಯುಃ ॥ ೨ ॥

ಮಾನವರು ದೇವತೆಗಳ ಅನುಗ್ರಹದಿಂದ ಸುಖವಾಗಿರುತ್ತಾರೆ. ಅನುಗ್ರಹರಹಿತವಾದರೆ ಮೂಲವೇ ನಾಶವಾಗುತ್ತದೆ.

ಹಿಂದೆ ಎಲ್ಲಾ ಪರ್ವತಗಳಿಗೆ ರೆಕ್ಕೆಗಳಿದ್ದುವಂತೆ. ಆದುದರಿಂದ ಅವುಗಳು ಮನಬಂದಂತೆ ಹಾರಾಡುತ್ತಾ ರಾಜ್ಯ, ಗ್ರಾಮಗಳ ಮೇಲೆ ಬಿದ್ದು ಹಾನಿ ಮಾಡುತಿದ್ದುವು. ಅವೆಷ್ಟೋ ರಾಜ್ಯಗಳೂ ಹಳ್ಳಿಗಳೂ ನಾಶಹೊಂದಿದವು.

ಇದನ್ನು ಸಹಿಸದೆ ಹದಿನಾಲ್ಕು ಲೋಕದ ಚಕ್ರವರ್ತಿ ದೇವೇಂದ್ರನು ಲೋಕ ಕಲ್ಯಾಣವನ್ನು ಇಚ್ಛಿಸಿದವನಾಗಿ, ಭೂಮಿಗಿಳಿದು, ಪರ್ವತಗಳ ರೆಕ್ಕೆಗಳನ್ನು ಹರಿತವಾದ ವಜ್ರಾಯುಧದಿಂದ ಛೇದಿಸಿದನು. ಈ ಮಧ್ಯೆ ಮೈನಾಕವೆಂಬ ಪರ್ವತವು ತಲೆಮರೆಸಿಕೊಂಡು ಸಮುದ್ರದಲ್ಲಿ ಇಂದಿಗೂ ಅಡಗಿದೆ. ಪರ್ವತಗಳಿಗೆ ವಜ್ರದ ಭಯವೆನ್ನುತ್ತಾರೆ.

೩

ದೈವಮೇವ ಪರಂಮನ್ಯೇ ಪೌರುಷಂತು ನಿರರ್ಥಕಂ ॥
ದೈವೇನ ರಕ್ಷಿತಃ ಸರ್ಪೋ ಮೂಷಕಶ್ಚ ವಿನಾಶಿತಃ ॥ ೩ ॥

ಮಾನವನ ಪೌರುಷಕ್ಕಿಂತಲೂ ದೈವವು ಶ್ರೇಷ್ಠವೆಂಬುದನ್ನು ಮರೆಯಬಾರದು. ಯಾವತ್ತೂ ಜೀವರಾಶಿಗಳ ಬಂಧಮೋಕ್ಷಗಳಿಗೆ ದೈವವೇ ಕಾರಣ.

ಓರ್ವ ಹಾವಾಡಿಗನು ಒಂದು ಸರ್ಪವನ್ನು ಹಿಡಿದು ಸಲಾಕೆ ಪೆಟ್ಟಿಗೆಯಲ್ಲಿಟ್ಟು ಸಾಕುತ್ತಿದ್ದನು. ಗ್ರಾಮಗ್ರಾಮಕ್ಕೆ ಹೋಗಿ ಆ ಸರ್ಪದಿಂದ ಜೀವನ ಸಾಗಿಸುತ್ತಿದ್ದನು. ಒಂದು ದಿನ ಕಾರಣಾಂತರದಿಂದ ಹಾವಾಡಿಗನು ಸರ್ಪವನ್ನು ತನ್ನ ಮನೆಯಲ್ಲಿ ಬಿಟ್ಟು, ಬೇರೆ ಗ್ರಾಮಕ್ಕೆ ತೆರಳಿದನು. ಕಾರ್ಯಾಂತರದಿಂದ ಎರಡು ಮೂರು ದಿನಗಳ ವರೆಗೆ ಬರಲಾಗಲಿಲ್ಲ. ಸರ್ಪಕ್ಕೆ ಉಪವಾಸವಾಯಿತು. ಬಹಳ ನಿಶ್ಶಕ್ತಿಯಿಂದ ಬಿದ್ದಿರಲು, ಒಂದು ಇಲಿಯು ಆಹಾರವನ್ನು ಹುಡುಕುತ್ತಾ ಪೆಟ್ಟಿಗೆಯ ಸನಿಹಕ್ಕೆ ಬಂದು ಮೆಲ್ಲನೆ ರಂಧ್ರವನ್ನು ಕೊರೆದು ಒಳ ಪ್ರವೇಶಿಸಿತು. ಮೊದಲೇ ಕಾದಿದ್ದ ಸರ್ಪವು ಮೂಷಕವನ್ನು ತಿಂದು ಅದೇ ರಂಧ್ರಮೂಲಕ ಯಥೇಚ್ಛವಾಗಿ ಹೋಯಿತು.

೪

ದುರ್ದೈವ ಪುರುಷೋ ಯತ್ರ ಯಾತಿ ತತ್ರೈವ ಚಾಪದಃ ॥
ತಾಲಭಗ್ನ ಶಿರಾಃ ಕೋಽಪಿ ಖವಾರಟೋತ್ರ ನಿದರ್ಶನಂ ॥ ೪ ॥

ದುರ್ದೈವೀ ಪುರುಷನು ಎಲ್ಲೆಲ್ಲಿ ಹೋಗುವನೋ ದುರ್ದೈವವು ಅಲ್ಲಲ್ಲಿಗೆ ಹಿಂಬಾಲಿಸುತ್ತದೆ.

ಬೇಸಿಗೆಯ ಕಾಲ. ಮಟಮಟ ಮಧ್ಯಾಹ್ನ ಸಮಯ. ಸೂರ್ಯನು ಭೂಮಿಯ ಮೇಲೆ ನಿರ್ದಯನಾಗಿ ಪ್ರಚಂಡ ಉರಿ ಕಾರುತ್ತಿದ್ದನು.

ತತ್ಸಮಯ ಓರ್ವ (ಬೋಳುತಲೆ) ಖರ್ವಾಟನು ಸಹಿಸಲಾರದ ಬೇಗೆಯಿಂದ ಸಂತಾಪಪಡುತ್ತಾ ಬೇಗಬೇಗನೇ ನಡೆಯುತ್ತಿದ್ದನು. ನೆರಳಲ್ಲಿ ವಿಶ್ರಾಂತಿ ಪಡೆಯೋಣವೆಂದರೆ ಒಂದು ಮರವಾದರೂ ಇರಲಿಲ್ಲ. ಹಾಗೆ ಬರುತ್ತಿದ್ದಂತೆ ದೂರದಲ್ಲೊಂದು ತಾಳವೃಕ್ಷವನ್ನು ಕಂಡು ಹರುಷಿತನಾಗಿ ಧಾವಿಸಿ ಕೊಂಡೋಡಿ ವೃಕ್ಷದ ಮೂಲವನ್ನು ಸೇರಿದನು. 'ಉಸ್ಸೆ'ಂದು ನಿಟ್ಟುಸಿ ರೊಂದನ್ನು ಬಿಡುವಷ್ಟರಲ್ಲಿ ವೃಕ್ಷಾಗ್ರದಲ್ಲಿ ಪಕ್ವವಾದ ಹಣ್ಣೊಂದು ಕಾಗೆಯ ಸೋಂಕಿನಿಂದ ಪಾಪ ಖರ್ವಾಟನ ಕಾದ ನಡು ನೆತ್ತಿಗೆ ದೊಪ್ಪನೆ ಬಿದ್ದು ಬಿಟ್ಟಿತು. ಅಹೋ! ಸಶಬ್ದದಿಂದ ಶಿರವು ಭಗ್ನವಾಗಿ ಛಟಾರನೆ ಚೀರುತ್ತಾ ಖರ್ವಾಟನು ಉರುಳಿದನು.

೫

ನಿಮಗ್ನಸ್ಯ ತಯೋ ರಾತೌ । ಪರ್ವತಾತ್ ಪತಿತಸ್ಯ ಚ ।
ತಕ್ಷಕೇಣಾಪಿ ದಷ್ಟಸ್ಯ । ಆಯುರ್ಮರ್ಮಾಣಿ ರಕ್ಷತಿ ॥ ೫ ॥

ನೀರಿನಲ್ಲಿ ಮುಳುಗಿದರೂ, ಪರ್ವತದಿಂದ ಬಿದ್ದರೂ, ಸರ್ಪದಿಂದ ಕಡಿತವಾದರೂ ಆಯುಷ್ಯವಿದ್ದರೆ ಮರ್ಮಗಳು ರಕ್ಷಿಸಲ್ಪಡುತ್ತವೆ.

ಗೋವಿಂದನೆಂಬ ಹನ್ನೆರಡು ವರುಷದ ಬಾಲಕ ಸ್ನಾನಕ್ಕಾಗಿ ನದಿಗೆ ಹೋಗುವಾಗ, ದಾರಿಮಧ್ಯ ಒಂದು ಸರ್ಪವನ್ನು ಕಂಡನು. ಕಂಡಾಕ್ಷಣ ಕಲ್ಲುಗಳನ್ನು ಹೆಕ್ಕಿ ಎಸೆದನು. ಆ ಸರ್ಪವು ಭಯದಿಂದ ಓಡಿತು. ಅನು ಸರಿಸುತ್ತಾ ಗೋವಿಂದನೂ ಓಡಿ ಪಾಷಾಣ ಖಂಡಗಳಿಂದ ಹೊಡೆದನು. ಸಿಟ್ಟುಗೊಂಡ ಸರ್ಪವು ಹಿಂದಕ್ಕೆ ಹಾರಿ ಗೋವಿಂದನ ಕಾಲಿಗೆ ಕಚ್ಚಿ ಓಡಿ ಹೋಯಿತು. "ಹಾ! ಹಾ! ಸರ್ಪ" ಎಂದು ಬೊಬ್ಬಿಡುತ್ತಾ ಮನೆಗೋಡಿ ವಿಷವೇಗದಿಂದ ಮೂರ್ಛೆಹೋದನು. ಎಲ್ಲರೂ ಕರ್ತವ್ಯಮೂಢರಾಗಲು, ಕೋಪಿ ಮಂತ್ರವಾದಿಯು ಪ್ರವೇಶಿಸಿ ಗಾರುಡ ಮಂತ್ರ ಜಪಿಸಿದನು. ಕ್ರಮ ದಿಂದ ವಿಷವೇಗವು ಶಾಂತಿಯಾಗಲು, ಗೋವಿಂದನು ಎಚ್ಚೆತ್ತು, ನಡೆದುದನ್ನು ನುಡಿದನು. ಇವಂಥ ಅನಗತ್ಯ ಕಾರ್ಯವನ್ನು ಮಾಡಬಾರದು. ಮನ ಸ್ಸಿಂದಲೂ ಎಣಿಸಬಾರದು.

೬

ನಸ್ನಾತವ್ಯಂ ನಗಂತವ್ಯ ದುರ್ಜನೇನ ಸಮಂ ಕ್ವಚಿತ್ ॥
ಕಾಕಸ್ಯ ಸಹವಾಸೇನ ವಿನಷ್ಟೊ ರಾಜಹಂಸಕಃ ॥ ೬ ॥

ದುರ್ಜನ ಸಹವಾಸ ಮಾಡಬಾರದು; ಇರಕೂಡದು; ಹೋಗಬಾರದು. ದುಷ್ಟಕೃತ ಅಪರಾಧದಿಂದ ಸಜ್ಜನರು ಅಪರಾಧಿಗಳಾಗುತ್ತಾರೆ.

ಪಂಪಾನದೀತೀರದ ದೊಡ್ಡ ಮರವೊಂದರಲ್ಲಿ ಕಾಗೆ ಮತ್ತು ಹಂಸವು ಬಹು ಸಹವಾಸದಿಂದ ವಾಸಮಾಡುತ್ತಿದ್ದುವು. ಒಂದು ದಿನ ಮಧ್ಯಾಹ್ನ ಸಮಯ ಓರ್ವ ಪ್ರಯಾಣಿಕ ಬಹಳ ಶ್ರಮಗೊಂಡು ಆ ವೃಕ್ಷಮೂಲವನ್ನು ಸೇರಿ ವಿಶ್ರಾಂತಿಗಾಗಿ ಮಲಗಿದನು. ಕೆಲಹೊತ್ತಿನಲ್ಲೇ ಸೂರ್ಯನು ಅಡ್ಡ ಹಾಯಲು ಎಲೆಗಳೆಡೆಯಿಂದ ಸೂರ್ಯನ ಉರಿ ಕಿರಣವು ಗಾಢನಿದ್ರೆಯಲ್ಲಿರುವ ಪಥಿಕನ ದೇಹದ ಮೇಲೆ ಪಸರಿಸಿತು. ಇದನ್ನು ಕಂಡ ಹಂಸವು ಉಪಕಾರದೃಷ್ಟಿಯಿಂದ ಕಿರಣಕ್ಕೆದುರಾಗಿ ರೆಕ್ಕೆಗಳನ್ನು ಬಿಚ್ಚಿ ನಿದ್ರಿಸಿದವನಿಗೆ ನೆರಳು ಬರುವಂತೆ ಮಾಡಿತು. ಈ ಮಧ್ಯೆ ಪರಸುಖವನ್ನು ಸಹಿಸದ ಕಾಗೆಯು ಪಥಿಕನ ದೇಹದ ಮೇಲೆ ಉಚ್ಛಿಷ್ಟಮಾಡಿ ಹಾರಿಹೋಯಿತು. ನಿದ್ರೆಯಿಂದ ಎಚ್ಚರಗೊಂಡ ಪಾಂಥನು ದೇಹದ ಮೇಲಿರುವ ಉಚ್ಛಿಷ್ಟವನ್ನು ಕಂಡು ಕೋಪದಿಂದ ಮೇಲೆ ನೋಡಲು, ಹಂಸವು ಗೋಚರಿಸಿತು. ಉಪಕಾರಮಾಡಿದ ಹಂಸವೇ ಅಪರಾಧಿಯೆಂದು ನೆನಸಿ, ಹೊಡೆದು ಕೊಂದನು.

೭

ಅತಿ ಲೋಭೊ ನ ಕರ್ತವ್ಯಃ ಲೋಭಂಚ ನ ಪರಿತ್ಯಜೇತ್ ॥
ಅತಿ ಲೋಭಾಭಿ ಭೂತಸ್ಯ ಕರಸ್ಥಮಪಿ ನಶ್ಯತಿ ॥ ೭ ॥

ಆಸೆಯನ್ನು ಬಿಡಬಾರದು. ಆದರೆ ಅತಿ ಆಸೆಯನ್ನೂ ಮಾಡಬಾರದು. ಅತಿ ಲೋಭದಿಂದ ಸರ್ವವೂ ನಾಶವಾಗುವುದು,

ಒಂದಾನೊಂದು ನರಿಯು ಆಹಾರಕ್ಕೋಸ್ಕರ ಅಲ್ಲಲ್ಲಿ ಹುಡುಕುತ್ತಿತ್ತು. ಎಲ್ಲೂ ಸಿಗದೆ ನಿರಾಶೆಹೊಂದಿ ಹಿಂದಕ್ಕೆ ತೆರಳಲು, ಒಂದು ಆಡಿನ ಮರಿಯನ್ನು ಕಂಡು ಹರುಷದಿಂದ ಅದನ್ನು ಕೊಂದು, ಕಚ್ಚಿಕೊಂಡು ನದೀ

ತೀರವಾಗಿ ನಡೆಯಿತು. ಅಲ್ಲಿ ಗಾಳಿಗಾಗಿ ಮೇಲೆ ಬಂದಿದ್ದ ಮೊಸಳೆಯನ್ನು ಕಂಡ ನರಿಯು ಹೆಚ್ಚಿನ ಮಾಂಸಕ್ಕಾಗಿ ಆಸೆಗೊಂಡು ಅಜಶಿಶುವನ್ನು ದೂರ ವಿಟ್ಟು ಮೊಸಳೆಯನ್ನು ಸಮೀಪಿಸಿತು. ಪ್ರಾಣಾಪಾಯವನ್ನರಿತ ಮಕರವು ಥಕ್ಕನೆ ನದಿಯನ್ನು ಪ್ರವೇಶಿಸಿತು. ಅಷ್ಟರಲ್ಲಿ ಒಂದು ಗಿಡುಗವು ಹಾರಿ ಬಂದು ಅಜಮರಿಯನ್ನು ಎತ್ತಿಕೊಂಡು ಮೇಲೇರಿತು. ಅತಿ ಆಸೆಗೊಂಡ ನರಿಯು ಉಪವಾಸದಿಂದ ನಡೆಯಿತು.

೮

ವಸ್ತ್ರೇಣೈವ ಪುಮಾನ್ ಲೋಕೇ ಪೂಜನೀಯ ತಮೋ ಭವೇತ್ ॥
ಸೂಕ್ಷ್ಮ ವಸ್ತ್ರಧರೋ ವಿದ್ವಾನ್ ಧನಿಕೇನಾಭ್ಯ ಪೂಜಯೇತ್ ॥ ೮ ॥

ಲೋಕದಲ್ಲಿ ಪುರುಷನು ದರಿದ್ರನಾದರೂ ವಿದುಷನಾದರೂ ವಸ್ತ್ರಾಲಂಕಾರದಿಂದ ಪೂಜನೀಯನಾಗುತ್ತಾನೆ.

ಓರ್ವ ದರಿದ್ರನಾದ ವಿದ್ವಾಂಸನು ಜೀರ್ಣ ವಸ್ತ್ರವನ್ನು ಧರಿಸಿಕೊಂಡವನಾಗಿ ಧನಿಕನ ಭವನವನ್ನು ಕುರಿತು ಹೋದನು. ಧನಿಕನು ಮಾತ್ರ ಈತನು ದರಿದ್ರನೆಂದು ಕಣ್ಣೆತ್ತಿ ಕೂಡ ನೋಡಲಿಲ್ಲ. ಸೂಕ್ಷ್ಮವಿಚಾರಿ ವಿದ್ವಾಂಸನು, ನಿರಾಶೆಹೊಂದಿ ಹಿಂದಿರುಗಿದನು. ಮಃರುದಿನ ನಿರ್ಮಲವಾದ ವಸ್ತ್ರ ಧರಿಸಿಕೊಂಡು ಪುನಃ ಧನಿಕನಲ್ಲಿಗೆ ತೆರಳಿದನು. ಧನಿಕನು ವಿದ್ವಾಂಸನನ್ನು ಯೋಗ್ಯ ರೀತಿಯಿಂದ ಉಪಚರಿಸಿದನು. ಬುದ್ಧಿವಂತ ವಿದ್ವಾಂಸನು ಭೋಜನಕ್ಕೆ ಕುಳಿತಾಗ ತಾನುಟ್ಟ ನಿರ್ಮಲ ವಸ್ತ್ರವನ್ನು ಬಿಚ್ಚಿ ಮಣೆಯ ಮೇಲಿಟ್ಟು ಒಂದಷ್ಟು ಅನ್ನದ ಕವಳನ್ನು ವಸ್ತ್ರದ ಮೇಲಿಟ್ಟನು. ಧನಿಕನು ಆಶ್ಚರ್ಯದಿಂದ "ಕಾರಣವೇನೆಂದು" ಕೇಳಲು, ವಿದ್ವಾಂಸನು, "ಮಹಾಶಯ, ದರಿದ್ರನು ವಿದ್ವಾಂಸನಾಗಬಾರದು. ನಿರ್ಮಲ ವಸ್ತ್ರವನ್ನುಡಲು ಗತಿ ಇಲ್ಲದ ನನ್ನಂತಹ ವ್ಯಕ್ತಿಗೆ ನಿನ್ನಂತಹ ಧನಿಕನಿಂದ ಮಾನ್ಯತೆ ಪಡೆಯಲು ಹೇಗೆ ಸಾಧ್ಯ? ಇಂದಿನ ಮರ್ಯಾದೆ ನನಗಲ್ಲ. ಈ ವಸ್ತ್ರಕ್ಕೆ!" ಎಂದು ಪೂರ್ವ ವೃತ್ತಾಂತವನ್ನು ಹೇಳಲು, ಧನಿಕನು ಲಜ್ಜಿತನಾಗಿ ವಿದ್ವಾಂಸನನ್ನು ಬಹುವಾಗಿ ಮಾನಿಸಿದನು.

೯

ಧರ್ಮಶೀಲಾಹಿ ಪುರುಷಾಃ ಲಭಂತೇಽತರ್ಕಿತಂ ಫಲಂ ||
ಸ್ಮೃರ್ಥೇನುಃ ಧರ್ಮಶೀಲಸ್ಯ ವಿಕ್ರಮಸ್ಯ ವಶೀಭವತ್ || ೯ ||

ಧರ್ಮ, ದಯಾಶೀಲ ಪುರುಷರು ಉತ್ತಮವಾದ ಫಲವನ್ನೇ ಪಡೆಯುತ್ತಾರೆ.

ಉಜ್ಜಯಿನಿ ರಾಜ್ಯವನ್ನು ಧಾರ್ಮಿಕನಾಗಿ ವಿಕ್ರಮನೆಂಬ ರಾಜನು ಆಳುತ್ತಿದ್ದನು. ಅತನ ಧರ್ಮವನ್ನು ಪರೀಕ್ಷಿಸಲೋಸುಗ ಸುರಲೋಕದ ಕಾಮಧೇನು ಭೂಮಿಗಿಳಿದು ದಾರಿಯ ಕೆಸರಿನಲ್ಲಿ ಮಗ್ನವಾಗಿ ಉರುಳಾಡುತಿತ್ತು. ಆನೆಯ ಮೇಲೆ ಸವಾರಿಮಾಡುತ್ತಿದ್ದ ವಿಕ್ರಮನು ಧೇನುವಿನ ವಿಷಾದದೃಶ್ಯವನ್ನು ಕಂಡೊಡನೆ ಆನೆಯಿಂದಿಳಿದು, ಧೇನುವಿನ ಸಮೀಪಕ್ಕೆ ಬಂದನು. ಕೆಸರಿನಿಂದ ಧೇನುವನ್ನು ಎತ್ತಿಕೊಂಡು ನದೀತೀರಕ್ಕೆ ಒಯ್ದು ಸ್ನಾನಮಾಡಿಸಿ, ತಿನ್ನಲು ಹಿಡಿಗ್ರಾಸವನ್ನು ನೀಡಿದನು. ಸಂತೋಷಗೊಂಡ ಧೇನುವು, "ಮಹಾರಾಜ, ಸಂತೋಷಿತಳಾದೆ ನಾನು ಸುರಧೇನು. ಬೇಕಾದ ವರವನ್ನು ಬೇಡು" ಎನಲು ರಾಜನು ಪುಳಕಿತನಾಗಿ ಕೈಮುಗಿದು "ತಾಯಿ, ಯಾವಾಗ ನನಗೆ ಮೆಚ್ಚುವಿರೆಂದ ಮೇಲೆ ನನ್ನರಮನೆಯಲ್ಲಿದ್ದು ಸದಾ ನನಗೆ ದರ್ಶನವನ್ನುಕೊಡುತ್ತಿರು" ಎಂದು ಕೇಳಿದನು. "ತಥಾಸ್ತು" ಎಂದಿತು ಧೇನು.

೧೦

ನೀಚಃ ಶ್ಲಾಘ್ಯಂ ಪದಂಪ್ರಾಪ್ಯ ಸ್ವಾಮಿನೇ ದ್ರೋಹಮಿಚ್ಛತಿ ||
ಮೂಷಕೋ ವ್ಯಾಘ್ರತಾಂ ಪ್ರಾಪ್ತಃ ಮುಹರ್ಷಿಂಹಂತು ಮಿಚ್ಛತಿ || ೧೦ ||

ನೀಚನು ಉತ್ತಮಪದವನ್ನು ಹೊಂದಿದರೆ ಸ್ವಾಮಿಯಲ್ಲಿ ದ್ರೋಹವನ್ನು ಬಗೆಯುತ್ತಾನೆ.

ಒಂದು ತಪೋವನದಲ್ಲಿ ಪರಮಹಂಸನೆಂಬ ಮುನಿ ಇರುತ್ತಿದ್ದನು. ಅತನ ಕುಟೀರದಲ್ಲಿ ಒಂದು ಇಲಿ ವಾಸಿಸುತ್ತಿತ್ತು. ಏಕದಾ ಆ ಇಲಿಯನ್ನು ತಿಂದುಬಿಡಬೇಕೆಂದು ಒಂದು ಕಾಗೆಯು ಹೊಂಚುಹಾಕುತ್ತಿತ್ತು. ತಿಳಿದ ಮುನಿಯು ಆ ಇಲಿಯನ್ನು ಮಂತ್ರಬಲದಿಂದ ಬೆಕ್ಕುರೂಪವನ್ನಾಗಿ ಮಾಡಿ

ದನು. ಹೀಗಿರಲು ಆ ಬೆಕ್ಕನ್ನು ನಾಯಿ ಹೊಂಚುಹಾಕುತ್ತಿತ್ತು. ಅರಿತು ಮುನಿಯು ಬೆಕ್ಕನ್ನು ನಾಯಿಯನ್ನಾಗಿ ಮಾಡಿದನು. ಒಂದುದಿನ ನಾಯಿಯು ಹುಲಿಯಿಂದ ಬೆದರಿತು. ಆಗ ಮುನಿಯು ನಾಯಿಯನ್ನು ಹುಲಿರೂಪವನ್ನಾಗಿ ಮಾಡಿದನು. ಇಲಿಯನ್ನು ಹುಲಿಯನ್ನಾಗಿ ಮಾಡಿದ ಮುನಿಯ ಮಹಿಮೆಯು ಲೋಕದಲ್ಲೆಲ್ಲಾ ಹರಡಿತು. ಆಗ ಹುಲಿಯು “ಈ ಮುನಿಯು ಬದುಕಿದ್ದರೆ ನನ್ನ ರಹಸ್ಯವು ಬಯಲಾಗುವುದು. ನನಗೆ ಶಾಂತಿ ಇಲ್ಲ. ಈ ಮುನಿಯನ್ನೇ ನಾಶಮಾಡಬೇಕೆ”ಂದು ಸಮಯ ನಿರೀಕ್ಷಿಸುತ್ತಿರಲು, ಇದನ್ನು ತಿಳಿದ ಮುನಿಯು ದುರ್ಬುದ್ಧಿಯ ಆ ಪ್ರಾಣಿಯನ್ನು ಮೊದಲಿನಂತೆ ಇಲಿಯನ್ನಾಗಿ ಮಾಡಿ, ಕುಟೀರದಿಂದ ಹೊರಗಟ್ಟಿದನು.

## ೧೧

ಖಲಃ ಕರೋತಿ ದುರ್ವೃತ್ತಂ ನೂನಂ ಫಲತಿ ಸಾಧುಷು ॥
ಕಪಿನಾಭಕ್ಷಿತಂ ಭಕ್ತ ಮಜೋ ದಂಡಮವಾಪ್ತವಾನ್ ॥ ೧೧ ॥

ದುಷ್ಟರು ಮಾಡಿದ ದುರಾಚಾರಗಳಿಂದ ಸಾಧುಗಳು ಫಲವನ್ನನುಭವಿಸುತ್ತಾರೆ! ದುಷ್ಟರು ಅಪರಾಧಿಗಳಾದರೂ ಸಾಧುಗಳಂತಿರುತ್ತಾರೆ. ಸಾಧುಗಳು ಅಪರಾಧಿಗಳಂತೆ ಇರುತ್ತಾರೆ. ಅವಿವೇಕಿಗಳು ಮನಬಂದಂತೆ ಮಾಡುತ್ತಾರೆ.

ಸುಮಂದನೆಂಬ ಓರ್ವ ರೈತನು ಒಂದು ಕಪಿಯನ್ನು ಚೆನ್ನಾಗಿ ಆಹಾರ ಇತ್ತು ಸಲಹುತ್ತಿದ್ದನು. ಒಂದು ದಿನ ಕಾರ್ಯಾಂತರದಿಂದ ಗ್ರಾಮಾಂತರಕ್ಕೆ ಹೋಗಬೇಕಾಗಿ ಬಂತು. ಬುತ್ತಿಯಲ್ಲಿ ಮೊಸರನ್ನವನ್ನು ಕಟ್ಟಿಕೊಂಡು ಮಂಗನಿಂದ ಕೂಡಿ ಹೊರಟನು. ಮಧ್ಯಾಹ್ನವಾಗಲು, ಮಧ್ಯಮಾರ್ಗದಲ್ಲಿ ಹಸಿವು ಪೀಡಿಸಿತು. ಬುತ್ತಿಯನ್ನು ಮರದಡಿಯಲ್ಲಿಟ್ಟು ಕೈಕಾಲು ತೊಳೆಯಲು ಸರಸ್ಸಿಗಿಳಿದನು. ಅಷ್ಟರಲ್ಲಿ ಬುತ್ತಿಯನ್ನವನ್ನು ಕಪಿಯು ಬೇಗ ಬೇಗನೆ ತಿಂದು, ಅಲ್ಲೇ ಹಾಯಾಗಿ ಮಲಗಿದ್ದ ಆಡಿನ ಮುಖಕ್ಕೆ ಮೊಸರನ್ನವನ್ನು ಲೇಪಿಸಿ, ತಿಳಿಯದವನಂತೆ ದೂರ ಸರಿದು ಕುಳಿತಿತು. ರೈತನು ಬಂದು ನೋಡಲು, ಬುತ್ತಿ ಬರಿದಾಗಿತ್ತು. ಆಡಿನ ವದನದಲ್ಲಿ ಮೊಸರಿನ ಗುರುತು ನೋಡಿ “ಈ ಅಜವೇ ಅನ್ನವನ್ನು ತಿಂದಿರಬೇಕೆಂದು”

ಕೋಪದಿಂದ ಸುಮಂದನು ಅದನ್ನು ಚೆನ್ನಾಗಿ ಹೊಡೆದು ಜೀವಶೇಷವನ್ನಾಗಿ ಬಿಟ್ಟನು.

೧೨

ಭಾಗ್ಯಂ ಫಲತಿ ಸರ್ವತ್ರ ನ ವಿದ್ಯಾ ನ ಚ ಪೌರುಷಂ ||
ಕೂಷ್ಮಾಂಡಾಭ್ಯಾಂತರೇ ಮುಕ್ತಾ ತುರುಷ್ಕೇನ ವಿಲೋಕಿತಾಃ || ೧೨ ||

ವಿದ್ಯಾವಂತನಾದರೂ, ಪೌರುಷವಂತನಾದರೂ, ದರಿದ್ರನಾದರೂ ಸುಖವಂತನಾಗಲು ಭಾಗ್ಯಬೇಕು.

ಒಬ್ಬಾನೊಬ್ಬ ರಾಜನು, ಪರೀಕ್ಷೆಗಾಗಿ ಕೂಷ್ಮಾಂಡದಲ್ಲಿ ರಂಧ್ರಮೂಲಕ ಸಾಕಷ್ಟು ಬಂಗಾರ ನಾಣ್ಯ ಮುತ್ತುಗಳನ್ನು ತುಂಬಿಸಿ, ರಂಧ್ರವನ್ನು ಮುಚ್ಚಿ, ಓರ್ವ ದರಿದ್ರ ಪಂಡಿತನನ್ನು ಆಮಂತ್ರಿಸಿ ಕೂಷ್ಮಾಂಡದಾನವೆಂದು ಕೊಟ್ಟು, ದಾನದಕ್ಷಿಣೆಯಾಗಿ ಒಂದು ವರಹ ನಾಣ್ಯವನ್ನೂ ಕೊಟ್ಟು ಕಳುಹಿಸಿದನು. ಆ ದರಿದ್ರನು ದಾರಿ ಮಧ್ಯದಲ್ಲಿ ಸಿಕ್ಕಿದ ಒಬ್ಬಾತನೊಡನೆ "ನನಗೆ ಬೇಕಷ್ಟು ಕುಂಬಳಕಾಯಿಗಳು ಮನೆಯಲ್ಲಿವೆ. ಇದನ್ನು ನೀನು ಪಡೆದು ನ್ಯಾಯ ಮೌಲ್ಯವನ್ನು ಕೊಡು" ಎಂದನು. ಸರಿಯೆಂದು ಆತನು ನ್ಯಾಯಬೆಲೆಯಿಂದ ಕೂಷ್ಮಾಂಡವನ್ನು ಪಡೆದು ಮನೆಗೆ ತೆರಳಿದನು. ಕೂಷ್ಮಾಂಡವನ್ನು ಮನೆಯಲ್ಲಿ ಹಚ್ಚಲು. ನಾಣ್ಯಗಳನ್ನು ಕಂಡು "ಭಾಗ್ಯ" ವೆಂದುಕೊಂಡನು ಇದನ್ನು ಕರ್ಣಾಕರ್ಣಿಕವಾಗಿ ತಿಳಿದ ರಾಜನು "ಅಹೋ ಭಾಗ್ಯ ಬಲವೇ" ಎಂದುಕೊಂಡನು.

೧೩

ಅತ್ಯುತ್ಪನ್ನ ಪದಂ ಪ್ರಾಪ್ತಃ ಪೂಜ್ಯಾನ್ನೈವಾವಮಾನಯೇತ್ ||
ನಹುಷಃ ಶಕ್ರತಾಂ ಪ್ರಾಪ್ತ ಚ್ಯುತೋ ಗಸ್ತ್ಯಾವಮಾನನಾತ್ || ೧೩ ||

ಮಾನವನು ಅತ್ಯುನ್ನತ ಪದವನ್ನು ಪಡೆದಾಗಲೂ ಪೂಜ್ಯರನ್ನು ಅವಮಾನಿಸಬಾರದು.

ಪೂರ್ವೇ ಚಂದ್ರವಂಶದಲ್ಲಿ ನಹುಷನೆಂಬ ರಾಜನು ಧರ್ಮದಾನಾದಿ, ಯಜ್ಞಯಾಗಾದಿಗಳಿಂದ ರಾಜ್ಯಪಾಲಿಸುತ್ತಿದ್ದನು. ಪುಣ್ಯಫಲಾವಶೇಷದಿಂದ ಸ್ವರ್ಗವನ್ನೇರಿ ಸಿಂಹಾಸನವನ್ನೇರಿದನು. ಅಧಿಕಾರಗರ್ವದಿಂದ

ಸಪ್ತಋಷಿಗಳಿಂದ ಪಾಲಕಿಯನ್ನು ಹೊರಿಸಿ ವೈಭವದಿಂದ ಸವಾರಿಮಾಡುತ್ತಿದ್ದನು. ಒಂದು ದಿನ ಕಾಮಪಿಪಾಸೆಯಿಂದ ಪಾಲಕಿಯಲ್ಲಿ ಕುಳಿತು ಶಚಿಯರಮನೆಗೆ ಹೊರಟನು. ಸಪ್ತಋಷಿಗಳಲ್ಲಿ ಅಗಸ್ತ್ಯರು ಗಿಡ್ಡ ವ್ಯಕ್ತಿ. ಆದುದರಿಂದ ಶಿಬಿಕೆಯು ಉಚ್ಚಾವಚ (ಏರುತಗ್ಗು) ಆಗುತ್ತಿತ್ತು. ಕೋಪದಿಂದ ನಹುಷನು "ಏಯ್ ಕುಂಟನೆ, ಜಾಗ್ರತಿಯಾಗಿ ಹೆಜ್ಜೆಯಿಡು" ಎಂದನು. ಈ ಮಾತಿಗೆ ಖತಿಗೊಂಡ ಋಷಿಯು, "ಎಲೈ ಮದಾಂಧ! ನಿನಗೆಲ್ಲಿ ಯೋಗ್ಯತೆ? ಹೆಬ್ಬಾವಿನ ರೂಪದಿಂದ ಕಾನನದಲ್ಲಿ ಅಲೆದಾಡು" ಎಂದು ಶಪಿಸಲು, ಕ್ಷಣಮಾತ್ರದಲ್ಲೇ ದೊಪ್ಪನೆ ಭೂಲೋಕಕ್ಕೆ ಉರುಳಿದನು.

## ೧೪

ಸಾಪರಾಧೋಽಪಿ ಪುರುಷಃ ಸತ್ಯವಾದೇನ ಮುಚ್ಯತೇ ।
ಪಾರಸೀಕಃ ಸತ್ಯವಾದೀ ಕಾರಾಗೇಹಾದ್ವಿಮೋಚಿತ ॥ ೧೪ ॥

ಅಪರಾಧ ಮಾಡಿದರೂ ಸತ್ಯ ಮಾತಿನಿಂದ ಸುಖ ಪಡೆಯುವನು. ಆದರೆ ಪರಸ್ವಾಪಹಾರ ಎಂದಿಗೂ ಒಳಿತಲ್ಲ.

ಸುನಂದ ರಾಜನು ವೃದ್ಧಾಪ್ಯ ಪ್ರಯುಕ್ತ ಪುತ್ರನಾದ ಶಾರದಾನಂದನಿಗೆ ರಾಜ್ಯವನ್ನು ವಹಿಸಿಕೊಟ್ಟು ವನಕ್ಕೆ ತೆರಳಿದನು. ರಾಜಕುಮಾರನು ಕಾರಾಗೃಹದಲ್ಲಿ ಬಂಧಿಸಿದ ಕೈದಿಗಳನ್ನು ಕರೆದು "ನಿಮ್ಮಿಂದ ಯಾವ ಯಾವ ಅಪರಾಧಗಳು ಮಾಡಲ್ಪಟ್ಟವೆ?" ಎಂದನು. ಒಬ್ಬನು "ಭೋ ರಾಜ, ಮಿಥ್ಯಾಪವಾದದಿಂದ ನನ್ನನ್ನು ಕಳ್ಳನೆಂದು ವಾದಿಗಳು ಆರೋಪಿಸಿದ್ದಾರೆ. ನಾನು ಕಳ್ಳನಲ್ಲ" ಎಂದನು.

ಮತ್ತೊಬ್ಬ, "ಸ್ವಾಮಿನ್, ನನ್ನಲ್ಲಿ ಅಧಿಕಾರಿಗಳಿಗೆ ದ್ವೇಷವಿರುವುದರಿಂದ ನನ್ನನ್ನು ಅಪರಾಧಿಯನ್ನಾಗಿ ಮಾಡಿದರು" ಎಂದನು. ಹೀಗೆ ಪ್ರತಿಯೊಬ್ಬರೂ ನಾವೆಲ್ಲ ನಿರಪರಾಧಿಗಳೆಂದುಕೊಂಡರು. ಒಬ್ಬನು ಮಾತ್ರ, "ಹೇ ರಾಜಕುಮಾರ! ನಾನು ಅಲ್ಪಬುದ್ಧಿಯಿಂದ ಓರ್ವ ಧನಿಕನ ಮನೆಗೆ ಕನ್ನಹಾಕಿ ಹೇರಳ ನಾಣ್ಯಗಳನ್ನು ಅಪಹರಿಸಿ ಸಿಕ್ಕಿಬಿದ್ದೆನು. ನಾನು ಅಪರಾಧಿ. ಕ್ಷಮಿಸಬೇಕು" ಎಂದನು. ರಾಜಕುಮಾರನು ಸತ್ಯದ ಮಾತುಗಳನ್ನು ಕೇಳಿ, ಆ ಕೈದಿಯನ್ನು ಬಿಡುಗಡೆಮಾಡಿದನು. ಉಳಿದವರಿಗೆ ಕಾರಾಗೃಹವೇ ಗತಿಯಾಯಿತು.

೧೫

ಉಪಾಯೇನಹಿ ಯಚ್ಛಕ್ಯಂ ನತಚ್ಛಕ್ಯಂ ಪರಾಕ್ರಮೈಃ ।
ಕಾಕ್ಯಾ ಕನಕಸೂತ್ರೇಣ ಕೃಷ್ಣ ಸರ್ಪೋ ನಿಪಾತಿತಃ ॥ ೧೫ ॥

ಯಾವ ಕಾರ್ಯ ಉಪಾಯದಿಂದ ಶಕ್ಯವೋ ಆ ಕಾರ್ಯವು ಪರಾಕ್ರಮದಿಂದ ಅಸಾಧ್ಯ.

ಮಿಥಿಲೋದ್ಯಾನದ ವಟವೃಕ್ಷದಲ್ಲಿ ವಾಯಸ ದಂಪತಿಗಳೂ ಇನ್ನಿತರ ಪಕ್ಷಿಗಳೂ ವಾಸಿಸುತ್ತಿದ್ದುವು. ಆ ಮರದ ಪೊಟರೆಯೊಂದರಲ್ಲಿ ಕೃಷ್ಣಸರ್ಪವೊಂದು ವಾಸಿಸುತ್ತಿತ್ತು. ಆ ಮರದಲ್ಲಿ ಹೆಣ್ಣು ಪಕ್ಷಿಗಳು ಮರಿಯಿಡಲು ಕೃಷ್ಣ ಸರ್ಪವು ಬಂದು ತಿಂದುಬಿಡುತ್ತಿತ್ತು. ಎಲ್ಲಾ ಪಕ್ಷಿಗಳೂ ಪುತ್ರಶೋಕದಿಂದ ಬೊಬ್ಬಿಡುತ್ತಿದ್ದುವು. ಅಷ್ಟರಲ್ಲಿ ಹೆಣ್ಣು ಕಾಗೆಯು ಗರ್ಭಿಣಿಯಾಯಿತು. ಆದರೆ ಮುಂದೆ ಬರಲಿರುವ ಪುತ್ರಶೋಕದ ಆಪತ್ತಿಗಾಗಿ ಗಂಡನೊಡನೆ ಅತ್ತುಕೊಂಡಿತು. ಗಂಡು ಕಾಗೆಯು ನರಿಯೊಂದರ ಉಪಾಯದ ಮಾತಿನಂತೆ ಪಟ್ಟಣಕ್ಕೆ ಹಾರಿ, ಸ್ನಾನಕ್ಕೆ ತೆರಳಿದ ರಾಜಕುಮಾರಿಯ ಕಂಠಹಾರವನ್ನು ಕೊಕ್ಕಿನಿಂದ ಕಚ್ಚಿಕೊಂಡು ನಿಧಾನವಾಗಿ ಹಾರಿತು. ರಾಜಭಟರು ಕಾಗೆಯನ್ನು ಅನುಸರಿಸಿದರು. ಕಾಗೆಯು ಕನಕಸೂತ್ರವನ್ನು ಸರ್ಪದ ಪೊಟರೆಯಲ್ಲಿ ಹಾಕಿ ಹಾರಿಹೋಯಿತು. ಆ ಭಟರು ಪೊಟರೆಯೊಳಗಿದ್ದ ಸರ್ಪವನ್ನು ಕೊಂದು ಹಾರವನ್ನು ಒಯ್ದರು. ಆ ಮೇಲೆ ಎಲ್ಲಾ ಪಕ್ಷಿಗಳೂ ಸುಖವಾಗಿದ್ದುವು.

೧೬

ಉಪದೇಶೋಹಿ ಮೂರ್ಖಾಣಾಂ ಪ್ರಕೋಪಾಯನ ಶಾಂತಯೇ ॥
ಪಶ್ಯವಾನರ ಮೂರ್ಖೇಣ ಚಟಕಾಂ ನಿಗೃಹೀಕೃತಾಂ ॥ ೧೬ ॥

ಮೂರ್ಖರಿಗೆ ಉಪದೇಶದ ಮಾತು ಕೋಪ ಹೆಚ್ಚಿಸುವುದಕ್ಕೆ ವಿನಹ ಶಾಂತಿಗಲ್ಲ.

ಗೋದಾವರಿ ನದೀ ತೀರದಲ್ಲಿ ವನವಿತ್ತು. ಅಲ್ಲೊಂದು ದೊಡ್ಡ ಮರವಿತ್ತು. ಎಲ್ಲೆಲ್ಲಿಂದಲೋ ಹಕ್ಕಿಗಳು ಬಂದು ಗೂಡು ಕಟ್ಟಿ ವಾಸಿಸುತ್ತಿದ್ದುವು. ಚಳಿಗಾಲ ಕಾಲಿಟ್ಟಿತು. ಆ ಚಳಿಗಾಲದಲ್ಲಿ ಒಂದು ಮಂಗವು

ವೃಕ್ಷಮೂಲದಲ್ಲಿ ಕುಳಿತು ಕಟಕಟನೆ ಹಲ್ಲು ಕಿರಿಯುತ್ತಾ, ಕಂಪಿಸುತ್ತಾ, ಮುದುಡಿ ಕುಳಿತಿತ್ತು. ಆಗ ಕರುಣೆಯಿಂದ ವೃಕ್ಷಾಗ್ರದಲ್ಲಿ ಮನೆಮಾಡಿ ಕೊಂಡಿರುವ ಗುಬ್ಬಚ್ಚಿ ದಂಪತಿಗಳಲ್ಲಿ ಹೆಣ್ಣು ಚಟಕವು ಗಟ್ಟಿಯಾಗಿ "ಕೇವಲ ಚಂಚುಚರಣಗಳುಳ್ಳ ನಾವುಗಳೆಲ್ಲಾ ಮನೆಮಾಡಿಕೊಂಡಿರುವೆವು. ಆದರೆ ಕೈಕಾಲುಗಳಿರುವ ಕಪಿಗಳೇಕೆ ಮನೆಮಾಡಲೊಲ್ಲವು? ಅಯ್ಯೋ! ಚಳಿಯಲ್ಲಿ ನಡಗುತ್ತಿದೆ" ಎಂದಿತು ಈ ಮಾತನ್ನು ಕೇಳಿದ ಮಂಗವು ಕೋಪದಿಂದ ಕಣ್ಣು ಮಿಟಕಿಸುತ್ತ, "ದುರಾಚಾರೆ, ಸೂಚಿಮುಖೆ! ಎಷ್ಟು ಸೊಕ್ಕು!" ಎಂದಿತು. ಗುಬ್ಬಿಯು ಪುನಃ ಅದೇ ಮಾತನ್ನು ಹೇಳಲು, ಕಪಿಯು ಕೋಪದಿಂದ ವೃಕ್ಷವನ್ನೇರಿ ಆ ದಂಪತಿಗಳ ಮನೆಯನ್ನು ಹಾಳುಗೈದು, ಯಥೇಚ್ಛವಾಗಿ ನಡೆಯಿತು.

## ೧೭

ಪಿಶುನೋ ಮಾನವೋಲೋಕೆ ನೈವ ಕ್ಷೇಮಮುಖ್ನಯಾತ್ ॥
ಪೈಶುನ್ಯಾನ್ನಾಶಮಾಪ್ನೋತಿ ಪಿಶುನೋ ವನಗಾರ್ದಭಃ ॥ ೧೭ ॥

ಲೋಕದಲ್ಲಿ ಚಾಡಿಗಾರನು ಕ್ಷೇಮವಂತನಾಗುವುದಿಲ್ಲ. ಚಾಡಿ ಮಾತಿನಿಂದ ಇನ್ನೋರ್ವನನ್ನು ನಾಶಮಾಡಲು ಯತ್ನಿಸಿ ತಾನೇ ನಾಶ ಹೊಂದುವನು.

ಬ್ರಹ್ಮಾರಣ್ಯದಲ್ಲಿ ಕರಾಲಮುಖವೆಂಬ ಮುದಿಸಿಂಹವಿತ್ತು. ದೇಹ ದಲ್ಲೂ ಅದಕ್ಕೆ ಸೌಖ್ಯವಿರಲಿಲ್ಲ. ಎಲ್ಲಾ ಮೃಗಗಳೂ ಅದರ ಕೈಂಕರ್ಯ ವನ್ನು ಮಾಡುತ್ತಾ ವಾಸಿಸುತ್ತಿದ್ದುವು. ಒಂದುದಿನ ಸೋಮನೆಂಬ ನರಿಯು ಬರಲಿಲ್ಲ. ಇದನ್ನು ಸಹಿಸದ ವನಗಾರ್ದಭವು ಸಿಂಹದೊಡನೆ "ರಾಜ! ಇಂದು ಸೋಮನು ಬರಲಿಲ್ಲ. ರಾಜರಿಗೆ ಅಸೌಖ್ಯವೆಂದು ಊರೂರೆಲ್ಲಾ ಪ್ರಚಾರಮಾಡುತ್ತಾ ಕುಶಾಲಿಯಾಗಿ ಅಲೆಯುತ್ತಾನೆ" ಎಂದಿತು. ಕೋಪ ಗೊಂಡ ಸಿಂಹವು ದಾರಿ ಮಧ್ಯ ಸಿಕ್ಕಿದ ಸೋಮನೊಡನೆ, "ರೇ, ನೀನೇಕೆ ನಿನ್ನೆ ಬರಲಿಲ್ಲ? ಸತ್ಯ ನುಡಿ" ಎಂದು ಗದರಿಸಿತು. ಸಿಂಹದ ಕೋಪದ ಕಾರಣವನ್ನು ಮೊದಲೇ ಅರಿತ ಸೋಮನು ನಮ್ರನಾಗಿ, "ಪ್ರಭೋ, ರಾಜ ನಿಗೆ ಸೌಖ್ಯವಿಲ್ಲವೆಂದು ನಾವು ಹೀಗಿರುವುದು ಅಸಮಂಜಸ. ಓರ್ವ ವೈದ್ಯ ನೊಡನೆ ಔಷಧಿ ಕೇಳೋಣವೆಂದು ಹೋಗಿದ್ದೆ" ಎಂದಿತು. "ಏನು

ಔಷಧ?" ಎಂದಿತು ಸಿಂಹ ಹರುಷದಿಂದ. "ರಾಜಾ. ಮನ್ನಿಸಬೇಕು. ವನ ಗಾದರ್ಭದ ಬಿಸಿ ರಕ್ತವೇ ಔಷಧ" ಎಂದು ಸೋವನು ಹೇಳಲು, ಮರುದಿನ ಕೈಂಕರ್ಯಕ್ಕೆ ಬಂದ, ಚಾಡಿ ಉಸುರಿದ ಕಾನನ ಕತ್ತೆಯ ಮೇಲೆ ಹಾರಿ ಸೀಳಿ ರಕ್ತಪಾನ ಮಾಡಿತು ಸಿಂಹ.

## ೧೮

ಉಪಾಯೇನ ಯತ್ ಶಕ್ಯಂ ನತಚ್ಛಕ್ಯಂ ಪರಾಕ್ರಮೈಃ ॥
ಕ್ರೋಷ್ಟ್ರಾಹತೋ ಯತೋ ಹಸ್ತೀ ಪಂಕ ಮಾರ್ಗೇಣ ಗಚ್ಛತಾ ॥ ೧೮ ॥

ಶಕ್ತಿಗಿಂತಲೂ ಯುಕ್ತಿ ಮೇಲು.

ಬ್ರಹ್ಮಾರಣ್ಯದಲ್ಲಿ ಕರ್ಪೂರತಿಲಕನೆಂಬ ದೊಡ್ಡ ಆನೆ ಇತ್ತು. ಆ ಕಾಡಿನಲ್ಲಿ ಅನೇಕ ನರಿಗಳಿದ್ದುವು. ಅವುಗಳಿಗೆ ಕೆಲವು ದಿನಗಳಿಂದ ಆಹಾರ ವಿಲ್ಲದೆ ಉಪವಾಸವಾಯಿತು. ಒಂದು ದಿನ ಎಲ್ಲಾ ನರಿಗಳೂ ಸಭೆಸೇರಿ ಒಂದು ಉಪಾಯವನ್ನು ಯೋಚಿಸಿದುವು. ಒಂದು ಮುದಿ ನರಿಯು ಆನೆಯ ಬಳಿಗೆ ಹೋಗಿ ಸಾಷ್ಟಾಂಗವೆರಗಿ, "ದೇವಾ! ನಿನ್ನೆ ನಮ್ಮ ಮಕ್ಕಳನ್ನು ಅನ್ಯಾಯವಾಗಿ ಹುಲಿಗಳು ಕೊಂದುವು. ಇದಕ್ಕೆ ಅರಾಜಕತ್ವವೇ ಕಾರಣ. ನಿಮ್ಮಷ್ಟೇ ಎತ್ತರದ ಒಂದು ಹೆಣ್ಣು ಆನೆಯನ್ನು ರಾಣಿಸ್ಥಾನಕ್ಕೆ ಸಿದ್ಧಗೊಳಿಸಿರುವೆವು. ನೀವು ಬಂದು ರಾಜಸಿಂಹಾಸನವನ್ನೇರಿ ದುಷ್ಟನಿಗ್ರಹಣ ಗೈಯ್ಯಬೇಕು" ಎಂದಿತು. ಈ ಮಾತನ್ನು ಕೇಳಿದ ಆನೆಯು, ಕಾಮ ಪಿಪಾಸೆಯಿಂದಲೂ ಗೌರವದಿಂದಲೂ "ಸರಿ" ಎಂದು ಒಪ್ಪಿತು. ಆನೆಯು ನರಿಯನ್ನು ಹಿಂಬಾಲಿಸಿತು. ನರಿಯು ಅತಿ ವೇಗವಾಗಿ ಕೆಸರಿನ ಮಾರ್ಗದಲ್ಲಿ ಓಡಿತು. ಹಿಂಬಾಲಿಸುತ್ತಾ ಓಡಿದ ಆನೆಯು ಕೆಸರಿನ ಮಧ್ಯದಲ್ಲಿ ಹೂತುಕೊಂಡಿತು. ಕಾಲೆತ್ತಲು ಅಸಾಧ್ಯವಾಯಿತು. ಆನೆಗೆ ಆಹಾರ ವಿಲ್ಲದೆ ಕೆಲವು ದಿನಗಳು ಕಳೆಯಲು ಮೃತಿಹೊಂದಿತು, ನರಿಗಳು ಬಹು ದಿನಗಳ ವರೆಗೆ ಯಥೇಚ್ಛವಾಗಿ ತಿಂದುವು.

## ೧೯

ಅಸತಾಂ ಸಂಗದೋಷೇಣ ಸಂತೋಷ್ಯಾಯಾತಿ ವಿಕ್ರಿಯಾಂ ॥
ದುರ್ಯೋಧನಸ್ಯ ಸಂಗೇನ ಭೀಷ್ಮೋ ಗೋಹರಣೆಗತಃ ॥ ೧೯ ॥

ಜ್ಞಾನಿಗಳು ದುರ್ಜನರ ಸಂಗದೋಷದಿಂದ ವಿಕ್ರಿಯಾದಿ ಕುಕರ್ಮಗಳನ್ನೂ ಮಾಡಬೇಕಾಗುತ್ತದೆ.

ಹಸ್ತಿನಾವತಿ ರಾಜ್ಯವನ್ನು ಆಳುತ್ತಿದ್ದ ದುರ್ಯೋಧನನು ಜೂಜಾಟದಲ್ಲಿ ಪಾಂಡವರನ್ನು ಸೋಲಿಸಿ ವನಕ್ಕಟ್ಟಿದನು. ಪಾಂಡವರು ವನವಾಸ ಮುಗಿಸಿ, ಒಂದು ವರ್ಷದ ಅಜ್ಞಾತವಾಸಕ್ಕಾಗಿ ಗುಪ್ತವೇಷದಿಂದ ವಿರಾಟ ನಗರದಲ್ಲಿ ವಾಸಿಸುತ್ತಿದ್ದರು. ಅಲ್ಲಿ ಬಲಿಷ್ಠ ಕೀಚಕನನ್ನು ಭೀಮನು ಕೊಂದ ವಾರ್ತೆಯನ್ನು ದುರ್ಯೋಧನನು ಕೇಳಿ ಭೀಷ್ಮ ಕರ್ಣಾದಿ ಭಟರೊಂದಿಗೆ ಹೊರಟನು. ಭೀಷ್ಮರೇ ಮೊದಲಾದ ವೀರರು ವಿರಾಟನಗರವನ್ನು ಸೇರಿ ಹಸುಗಳನ್ನೆಲ್ಲಾ ಕದ್ದೊಯ್ದರು. ಇದನ್ನರಿತ ವಿರಾಟನು ಯುದ್ಧಕ್ಕೆ ಹೋಗಲು ಅವನನ್ನೂ ಕಟ್ಟಿ ಕೊಂಡೊಯ್ಯಲು ಶಿಖಂಡಿವೇಷದಲ್ಲಿದ್ದ ಅರ್ಜುನನು ಉತ್ತರನ ಸಹಾಯದಿಂದ ಕೌರವ ಸೇನೆಯನ್ನು ಸೋಲಿಸಿದನು.

## ೨೦

ಪ್ರಭುಭಿಃ ಪೂಜ್ಯತೇ ಬಾಲ ಕಲೈವ-ನ-ಕುಲೀನತಾ ॥
ಕಲಾವಾನ್ ವಿಕ್ರಮಃ ಪೂರ್ವಂ ದೇವರಾಜೇನಮಾನಿತಃ ॥ ೨೦ ॥

ಕುಲೀನನಾಗಿದ್ದರೂ ಕಲಾವಂತನಾದರೆ ಪ್ರಭುಗಳಿಂದ ಪೂಜಿಸಲ್ಪಡುತ್ತಾನೆ. ಒಂದು ದಿನ ದೇವಸಭೆಯಲ್ಲಿ ನಾಟ್ಯದ ವಿಷಯವಾಗಿ ರಂಭಾ-ಊರ್ವಶಿಯರಿಗೆ ವಿವಾದವುಂಟಾಯಿತು. ಈ ವಿವಾದವನ್ನು ಬಗೆಹರಿಯಿಸುವವರು ಯಾರಿರುವರೆಂದು ದೇವೇಂದ್ರನು ಚಿಂತಿಸಲು, ನಾರದನು, "ಪ್ರಭೋ, ಉಜ್ಜಯಿನಿ ರಾಜ ವಿಕ್ರಮನು ಶಕ್ಯ"ನೆನಲು ದೇವೇಂದ್ರನು ಸಾರಥಿಯಾದ ಮಾತಲಿಯನ್ನು ವಿಮಾನಸಹಿತ ಕಳುಹಿಸಿದನು. ವಿಕ್ರಮನು ದೇವಸಭೆಯನ್ನು ಪ್ರವೇಶಿಸಲು ಪುನಃ ನಾಟ್ಯ ಆರಂಭವಾಗಿ ವಿವಾದಗಳು ಜನಿತವಾದುವು. ವಿಕ್ರಮನು ನಾಟ್ಯ ವಿಚಾರವಾಗಿ ಉಪನ್ಯಾಸ ಮಾಡಿ ಕೊನೆಗೆ ಉರ್ವಶಿಯ ನಾಟ್ಯಕ್ಕೆ ಮೆಚ್ಚುಗೆಯಿತ್ತನು. ವಿವಾದ ಶಾಂತವಾಗಲು ದೇವೇಂದ್ರನು ಸಂತೋಷದಿಂದ ಮೂವತ್ತೆರಡು ಸಾಲಭಂಜಿಕೆಗಳಿಂದ ರಕ್ಷಿತವಾದ ಸ್ವರ್ಣಮಯ ಸಿಂಹಾಸನವನ್ನು ವಿಕ್ರಮನಿಗೆ ಪಾರಿತೋಷಿಕವಾಗಿ ಕೊಟ್ಟು ಕಳುಹಿಸಿದನು.

ಕಲೋಪಾಸಕರು ಸಮಯ ಒದಗಿದಾಗ ದೇವತೆಗಳಿಂದಲೂ ಮಾನ್ಯತೆ ಪಡೆಯುವರು. ಏವಂಚ "ಸಾಹಿತ್ಯ ಸಂಗೀತ ಕಲಾ ವಿಹೀನ ಸಾಕ್ಷಾತ್ ಪಶುಃ" ಇತಿ.

॥ ಕಲಾಮಾತೆ ನಮೋಸ್ತುತೆ ॥

# ವಿಶಾಲವಾಗಿ ಹಬ್ಬಿರುವ ಸಂಸ್ಥೆ

ಮುಂಬಯಿ ಅಥವಾ ಮದರಾಸು ಬರೋಡ ಅಥವಾ ಬೆಂಗಳೂರು; ಕೊಚ್ಚಿ ಅಥವಾ ಕಡಪ್ಪಾ; ಹುಬ್ಬಳ್ಳಿ ಅಥವಾ ಹೈದರಾಬಾದು; ಕಲ್ಲಿಕೋಟೆ ಅಥವಾ ಕೊಯಮುತ್ತೂರು; —ನೀವು ಎಲ್ಲಿಗೆ ಹೋದರೂ (ವ್ಯಾಪಾರಕ್ಕಾಗಿ ಅಥವಾ ವಿಹಾರಕ್ಕಾಗಿ), ನಿಮ್ಮ ಆರ್ಥಿಕ ಸೌಕರ್ಯಗಳ ಕಡೆಗೆ ಗಮನ ಕೊಡಲು ಸಿಂಡಿಕೇಟ್ ಬೇಂಕ್ ಸಿದ್ಧವಿದೆ. ವಿಸ್ತಾರವಾಗಿ ಬೆಳೆಯುತ್ತಿರುವ ನಮ್ಮ ಶಾಖೆಗಳ ಪ್ರಯೋಜನವನ್ನು ಯಾವಾಗಲೂ ಪಡೆಯಬಹುದು. ನಿಮಗೇನಾದರೂ ವ್ಯವಹಾರವಿದ್ದರೆ ಸಿಂಡಿಕೇಟಿಗೆ ಬನ್ನಿರಿ ಅಥವಾ ಬರೆಯಿರಿ. ದಿ ಕೆನರಾ ಇಂಡಸ್ಟ್ರಿಯಲ್ ಎಂಡ್ ಬೇಂಕಿಂಗ್ ಸಿಂಡಿಕೇಟ್ ಲಿಮಿಟೆಡ್, ಪ್ರಧಾನ ಕಾರ್ಯಾಲಯ, ಮುಕುಂದ ನಿವಾಸ, ಉಡುಪಿ, ದಕ್ಷಿಣ ಕನ್ನಡ.

## ದಿ ಕೆನರಾ ಇಂಡಸ್ಟ್ರಿಯಲ್ ಎಂಡ್ ಬ್ಯಾಂಕಿಂಗ್ ಸಿಂಡಿಕೇಟ್, ಲಿಮಿಟೆಡ್.

Edited, Printed & Published by K. V. Shenoy
at The Prabhat Printers, Ltd., Mangalore.